ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ಕಾರ್ಮಿಕ ಕಲ್ಯಾಣ ನಿಧಿಯ ಕುರಿತು

ಶ್ರೀ ಪಿ.ಆರ್.ರಮೇಶ್ (ನಾಮನಿರ್ದೇಶನ ಹೊಂದಿದವರು) :-

848 (958) ಮಾನ್ಯ ಕಾರ್ಮಿಕ ಹಾಗೂ ಸಕ್ಕರೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಳೆದ 3 ವರ್ಷಗಳಿಂದ ರಾಜ್ಯದ ಕಾರ್ಮಿಕರ ಕಲ್ಯಾಣ ನಿಧಿಯ ಬೊಕ್ಕಸದಲ್ಲಿ ಕಾರ್ಮಿಕರ ಉಪಕರ (Labour Cess) ಮುಖಾಂತರ ಸಂಗ್ರಹವಾದ ಒಟ್ಟು ಮೊತ್ತವೆಷ್ಟು ; (ವರ್ಷವಾರು ವಿವರ ನೀಡುವುದು)

(ಆ) ಈ ಸಂಗ್ರಹವಾದ ನಿಧಿಯಲ್ಲಿರುವ ಹಣವನ್ನು ಸರ್ಕಾರ ಯಾವ ಯಾವ ಯೋಜನೆಗಳಿಗೆ ಅನುದಾನವಾಗಿ ಉಪಯೋಗಿಸಲು ಮಾರ್ಗಸೂಚಿಗಳು ಅಸ್ತಿತ್ವದಲ್ಲಿದೆ ; (ವಿವರ ನೀಡುವುದು)

(ಇ) ಪ್ರಸ್ತುತ ಕರೋನ ಮಹಾಮಾರಿ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಸಂಕಷ್ಟಕ್ಕೆ ಗುರಿಯಾಗಿರುವ ಅನೇಕ ಕಾರ್ಮಿಕರ ಮತ್ತು ಅವರ ಅವಲಂಬಿತ ಕುಟುಂಬಗಳ ಶ್ರೇಯೋಭಿವೃದ್ಧಿಗೆ ಈ ನಿಧಿಯನ್ನು ಸರ್ಕಾರ ಬಳಕೆ ಮಾಡಲು ಚಿಂತಿಸಿದೆಯೇ ; (ವಿವರ ನೀಡುವುದು) ಬಳಕೆ ಮಾಡಿದ್ದಲ್ಲಿ, ಸರ್ಕಾರವು ಈ ಅನುದಾನವನ್ನು ಯಾವ ರೀತಿಯಲ್ಲಿ ಉಪಯೋಗಿಸಿದೆ ? (ಮಾಹಿತಿ ನೀಡುವುದು)